# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 528
ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ. ರಾಥೋಡ್
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 11-12-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್-19 ಮಾರ್ಚ್ 2020ರ ನಂತರ ಕೆ.ಎಸ್.ಆರ್.ಟಿ.ಸಿ ಹಾಗೂ ಇತರೆ ನಿಗಮಗಳಿಗೆ ಆಗಿರುವ ನಷ್ಟದ ಪ್ರಮಾಣವೆಷ್ಟು; (ಪ್ರತಿ ನಿಗಮವಾರು ನಷ್ಟದ ವಿವರವನ್ನು ಒದಗಿಸುವುದು) | ಕೋವಿಡ್-19 ಮಾರ್ಚ್-2020ರ ನಂತರ (ದಿನಾಂಕ:30.11.2020 ರವರೆಗೆ) ಸಾರಿಗೆ ಸಂಸ್ಥೆಗಳು ಅನುಭವಿಸಿರುವ ನಷ್ಟದ ವಿವರ ಕೆಳಗಿನಂತಿರುತ್ತದೆ :<br>**(ರೂ.ಕೋಟಿಗಳಲ್ಲಿ)**<br>ಸಂಸ್ಥೆ — ನಷ್ಟದ ವಿವರ<br>ಕ.ರಾ.ರ.ಸಾ.ನಿಗಮ — 1540.70<br>ಬೆಂ.ಮ.ಸಾ.ಸಂಸ್ಥೆ — 1038.00<br>ವಾ.ಕ.ರ.ಸಾ.ಸಂಸ್ಥೆ — 956.30<br>ಈ.ಕ.ರಸಾ.ಸಂಸ್ಥೆ — 817.70 |
| ಆ | ನಷ್ಟ ಭರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | **ಸಾರಿಗೆ ಸಂಸ್ಥೆಗಳು ನಷ್ಟ ಭರಿಸಲು ಕೈಗೊಂಡಿರುವ ಕ್ರಮಗಳ ವಿವರ ಕೆಳಗಿನಂತಿರುತ್ತದೆ:**<br>**ಕ.ರಾ.ರ.ಸಾ.ನಿಗಮ:**<br>➢ ಕೊರೋನಾ-19ನಿಂದಾಗಿ ವಿಧಿಸಲಾಗಿದ್ದ ಲಾಕ್‌ಡೌನ್ ಪೂರ್ವದಲ್ಲಿದಂತೆ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲು ಮತ್ತು ಆದಾಯವನ್ನು ಗಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಪ್ರಸಕ್ತ ವರ್ಷ ಯಾವುದೇ ಹೊಸ ಅನುಸೂಚಿಗಳನ್ನು ಪ್ರಾರಂಭಿಸದೇ ಇರುವುದು, ಇದರಿಂದಾಗಿ ಹೊಸ ವಾಹನಗಳನ್ನು ಖರೀದಿಸಲಾಗುವುದಿಲ್ಲ.<br>➢ ಅಂತರ ರಾಜ್ಯ ಸಂಚಾರಕ್ಕೆ ಸಂಬಂಧಿಸಿದಂತೆ, ಆಂಧ್ರಪ್ರದೇಶ, ಕೇರಳ, ಗೋವಾ, ಮಹಾರಾಷ್ಟ್ರ, ತೆಲಂಗಾಣ, ಪುದುಚೇರಿ ಹಾಗೂ ತಮಿಳುನಾಡು ರಾಜ್ಯಗಳಿಗೆ ಕಾರ್ಯಾಚರಣೆಯನ್ನು ಪ್ರಾರಂಭಿಸಲಾಗಿದೆ.<br>➢ ಪ್ರಯಾಣಿಕರಿಂದ ಕಡಿಮೆ ಬೇಡಿಕೆ ಇರುವ ಕಾರಣ ಪೂರ್ಣ ಪ್ರಮಾಣವಾಗಿ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲು ಸಾಧ್ಯವಾಗಿರುವುದಿಲ್ಲ. ಆದಾಗ್ಯೂ, ಪ್ರಯಾಣಿಕರ ದಟ್ಟಣೆ ಮತ್ತು ಅವಶ್ಯಕತೆ ಅನುಗುಣವಾಗಿ ಬಸ್ಸುಗಳ ಸಂಖ್ಯೆಯನ್ನು ಹೆಚ್ಚಿಸಲಾಗುತ್ತಿದೆ.<br>➢ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಪರ್ಯಾಯ ಆದಾಯ ಕ್ರೋಢೀಕರಣದ ಸಲುವಾಗಿ ನೂತನ ಪಾರ್ಸಲ್ ಮತ್ತು ಕೊರಿಯರ್ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲು ಯೋಜಿಸಿದ್ದು, ಇದರಿಂದ ನಿಗಮದ ಸಾರಿಗೇತರ ಆದಾಯವನ್ನು ಹೆಚ್ಚಿಸಲು ಕ್ರಮ ವಹಿಸಲಾಗುತ್ತಿದೆ.<br>**ಬೆಂ.ಮ.ಸಾ.ಸಂಸ್ಥೆ:**<br>➢ ಸಾರ್ವಜನಿಕರನ್ನು ಸಮೂಹ ಸಾರಿಗೆಯತ್ತ ಸೆಳೆಯುವ ದೃಷ್ಟಿಯಿಂದ ಸಂಸ್ಥೆಯು ವಿವಿಧ ರೀತಿಯ ರಿಯಾಯಿತಿ ಪಾಸುಗಳನ್ನು ವಿತರಣೆ ಮಾಡುತ್ತಿದೆ.<br>➢ ಅಲ್ಲದೇ, ಸಂಸ್ಥೆಯು ಕಾರ್ಮಿಕ ಇಲಾಖೆಯ ಸಹಯೋಗದೊಂದಿಗೆ ಬೆಂಗಳೂರು ನಗರದ ಕಟ್ಟಡ ಮತ್ತು ನಿರ್ಮಾಣ ಕಾರ್ಮಿಕರಿಗೆ 'ಸಹಾಯ ಹಸ್ತ' ಪಾಸನ್ನು ವಿತರಣೆ ಮಾಡುತ್ತಿದೆ. |

...2

- ಮಹಿಳಾ ಗಾರ್ಮೆಂಟ್ಸ್ ನೌಕರರಿಗೆ ಹೆಚ್ಚಿನ ರಿಯಾಯಿತಿ ದರದಲ್ಲಿ ಮಾಸಿಕ ಪಾಸುಗಳನ್ನು ವಿತರಣೆ ಮಾಡುವ ಸಂಬಂಧ ಪಾಸಿನ ವೆಚ್ಚವನ್ನು ಭರಿಸುವ ಕುರಿತು ಕಾರ್ಮಿಕ ಇಲಾಖೆಯನ್ನು ಕೋರಲಾಗಿದೆ.
- ಬಿಬಿಎಂಪಿ, ಬಿಟಿಪಿ, ನಗರ ಭೂ ಸಾರಿಗೆ ನಿರ್ದೇಶನಾಲಯದ ಸಹಯೋಗದೊಂದಿಗೆ ಸೆಂಟ್ರಲ್ ಸಿಲ್ಕ್ ಬೋರ್ಡ್‌ನಿಂದ ಟಿನ್ ಫ್ಯಾಕ್ಟರಿಯವರೆಗೆ 'ಬಸ್ ಆದ್ಯತಾ ಪಥವನ್ನು' ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗಿದೆ. ಇದರಿಂದ ನಗರದ ಸಂಚಾರ ದಟ್ಟಣೆಯು ಕಡಿಮೆಯಾಗಿ, ಸಾರ್ವಜನಿಕರನ್ನು ಸಮೂಹ ಸಾರಿಗೆಯನ್ನು ಬಳಸಲು ಉತ್ತೇಜಿಸಲಾಗುತ್ತಿದೆ.
- ಮೆಟ್ರೋ ರೈಲು ಪ್ರಯಾಣಿಕರಿಗೆ ಮೆಟ್ರೋ ರೈಲು ನಿಲ್ದಾಣದಿಂದ ವಾಸಸ್ಥಳಗಳಿಗೆ ತಲುಪಲು (first and last mile connectivity) ಮೆಟ್ರೋ ಫೀಡರ್ ಸೇವೆಗಳನ್ನು ಒದಗಿಸಲಾಗುತ್ತಿದೆ.
- ಪ್ರಯಾಣಿಕರು ಹಾಗೂ ನಿರ್ವಾಹಕರ ನಡುವೆ ನಗದು ವ್ಯವಹಾರವನ್ನು ಕಡಿಮೆಗೊಳಿಸುವ ಹಾಗೂ ಚಿಲ್ಲರೆ ಸಮಸ್ಯೆ ನಿವಾರಿಸುವ ನಿಟ್ಟಿನಲ್ಲಿ ಪ್ರಯಾಣ ದರ ರೂ.5/- ರ ಗುಣಕದಲ್ಲಿ ನಿಗದಿಪಡಿಸಿ ಪುನರ್‌ರಚಿತ ಪ್ರಯಾಣದರಗಳನ್ನು ಆಕರಿಸಲಾಗುತ್ತಿದೆ.
- ನಗದು ವ್ಯವಹಾರವನ್ನು ಕಡಿಮೆಗೊಳಿಸಲು ಮತ್ತು ಸುಲಭವಾಗಿ ಹಣಸಂದಾಯಗೊಳಿಸಲು ಡಿಜಿಟಲ್ ಟಿಕೇಟಿಂಗ್ (QR code based) ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿರುತ್ತದೆ.
- ಮಾಸಿಕ ಮತ್ತು ದಿನದ ಪಾಸುಗಳ ಜೊತೆಗೆ ವಾರದ ಪಾಸುಗಳನ್ನು ಪರಿಚಯಿಸಲಾಗಿರುತ್ತದೆ.
- ಮುಂದುವರೆದು, ನಗರದ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸುವ ಹಿನ್ನೆಲೆಯಲ್ಲಿ ಹೆಚ್ಚಿನ ಸಂಚಾರ ದಟ್ಟಣೆಯ 12 ಕಾರಿಡಾರ್‌ಗಳಲ್ಲಿ ಬಸ್ ಆದ್ಯತಾ ಪಥವನ್ನು 2ನೇ ಹಂತದಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.
- ಸಂಸ್ಥೆಯು ಸಾಂದರ್ಭಿಕ ಒಪ್ಪಂದ, ಖಾಯಂ ಗುತ್ತಿಗೆ ಹಾಗೂ ಡೆಡಿಕೇಟೆಡ್ ಸೇವೆಗಳನ್ನು ಒದಗಿಸುತ್ತಿದೆ.
- ಭಾರತ ಸರ್ಕಾರದ ಫೇಮ್-2 ಅಡಿಯಲ್ಲಿ 300 ಹವಾನಿಯಂತ್ರಿತ ಬಸ್ಸುಗಳು, ರಾಜ್ಯ ಸರ್ಕಾರದ ಯೋಜನೆಯಡಿಯಲ್ಲಿ ಹಾಗೂ ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ 90 ಮೆಟ್ರೋ ಫೀಡರ್ ಬಸ್ಸುಗಳು ಒಟ್ಟಾರೆ 390 ಬಸ್ಸುಗಳನ್ನು ಸಂಸ್ಥೆಯ ವಾಹನ ಬಲಕ್ಕೆ ಸೇರ್ಪಡೆಗೊಳಿಸಲು ಯೋಜಿಸಲಾಗಿದೆ.

<u>ವಾ.ಕ.ರ.ಸಾ.ಸಂಸ್ಥೆ:</u>

- ಹೆಚ್ಚಿನ ಪ್ರಯಾಣಿಕರನ್ನು ಆಕರ್ಷಿಸಲು ಸಂಸ್ಥೆಯ ಪ್ರತಿಷ್ಠಿತ ಸಾರಿಗೆಗಳಿಗೆ ಪ್ರೋತ್ಸಾಹಕ ದರಗಳನ್ನು ಅಳವಡಿಸಲಾಗಿದೆ.
- ಸಂಸ್ಥೆಯ ವಾಹನಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೆ ಆಯ್ದ ಮಾರ್ಗಗಳಲ್ಲಿ ರಿಯಾಯಿತಿ ದರದಲ್ಲಿ ದೈನಂದಿನ ಪಾಸುಗಳನ್ನು ವಿತರಿಸಲಾಗುತ್ತಿದೆ.
- ನಗರ/ಉಪನಗರ ಸಾರಿಗೆಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೂ ಕೂಡ ದೈನಂದಿನ ಪಾಸ್ ಸೌಲಭ್ಯ ಒದಗಿಸಲಾಗಿದೆ.
- ಮಾಸಿಕ ಬಸ್ ಪಾಸ್ ವ್ಯವಸ್ಥೆಯನ್ನು ಕೂಡ ಅಳವಡಿಸಲಾಗಿದೆ.

| | | |
|---|---|---|
| | | ➢ ಪ್ರಸ್ತುತ ಶಾಲೆಗಳು-ಪದವಿ ಪೂರ್ವ ಕಾಲೇಜುಗಳು ಈವರೆಗೆ ಆರಂಭವಾಗದೇ ಇರುವುದರಿಂದ ಶಾಲಾ ವಿದ್ಯಾರ್ಥಿಗಳಿಗಾಗಿ ಕಾರ್ಯಾಚರಣೆಯಲ್ಲಿದ್ದ ಸರತಿ/ಅನುಸೂಚಿಗಳನ್ನು ತಾತ್ಕಾಲಿಕವಾಗಿ ಕಡಿತಗೊಳಿಸಿ, ಜನದಟ್ಟಣೆ ಮಾರ್ಗಗಳಲ್ಲಿ ಕಾರ್ಯಾಚರಣೆ ಮಾಡಲಾಗುತ್ತಿದೆ.<br>➢ ಅವಶ್ಯಕ ಸರತಿಗಳನ್ನು ಹೊರತುಪಡಿಸಿ ಪ್ರಯಾಣಿಕರ ದಟ್ಟಣೆ ತೀರಾ ಕಡಿಮೆ ಇರುವ ಮಾರ್ಗಗಳಲ್ಲಿ ಹಾಗೂ ಮುಂಗಡ ಬುಕ್ಕಿಂಗ್ ಆಗದೇ ಇರುವ ಪ್ರತಿಷ್ಠಿತ ಸಾರಿಗೆಗಳನ್ನು ರದ್ದುಪಡಿಸಲಾಗುತ್ತಿದೆ.<br><br>**ಈ.ಕ.ರ.ಸಾ.ಸಂಸ್ಥೆ:**<br><br>➢ ನೂತನ ಪಾರ್ಸಲ್ ಕೊರಿಯರ್ ವ್ಯವಸ್ಥೆ ಅನುಷ್ಠಾನಗೊಳಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.<br>➢ ಶಾಲಾ-ಕಾಲೇಜು ಮತ್ತು ಕಾರ್ಖಾನೆಗಳ ಮುಖ್ಯಸ್ಥರಿಗೆ ಪತ್ರ ಬರೆದು ಚಾರ್ಟರ್ಡ್ ಸರ್ವಿಸ್ ಪಡೆದುಕೊಳ್ಳಲು ಕ್ರಮ ಜರುಗಿಸಲಾಗಿರುತ್ತದೆ.<br>➢ ಖಾಲಿ ಇರುವ ಮಳಿಗೆಗಳಿಗೆ ಟೆಂಡರ್ ಪ್ರಕ್ರೀಯೆ ಸರಳೀಕರಣಗೊಳಿಸಿ ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಜಾಹೀರಾತು ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಅನುಸೂಚಿಗಳ ಪರಿಷ್ಕರಣೆ ಮಾಡಿ ಜನದಟ್ಟಣೆಯಿರುವ ಮಾರ್ಗಗಳಲ್ಲಿ ಸರತಿಗಳನ್ನು ಹೆಚ್ಚಿಸಿ ಸಾರಿಗೆ ಆದಾಯ ಹೆಚ್ಚಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಉತ್ತಮ ಆದಾಯ ಮಾರ್ಗಗಳಲ್ಲಿ ಹೆಚ್ಚುವರಿ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.<br>➢ ಕಡಿಮೆ ಆದಾಯ ಬರುವ ಅನುಸೂಚಿಗಳನ್ನು ಪರಿಷ್ಕರಣೆ ಮಾಡಲಾಗುತ್ತಿದೆ.<br>➢ ಮಾರ್ಗ ತನಿಖಾ ಕಾರ್ಯವನ್ನು ಸಮರ್ಪಕವಾಗಿ ಕೈಗೊಂಡು ಆದಾಯ ಸೋರಿಕೆಯಾಗದಂತೆ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಟಿಡಿ 259 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು